ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ರಾಜ್ಯದಲ್ಲಿ ಅನುಮತಿ ನೀಡಿರುವ ಗಣಿ ಗುತ್ತಿಗೆ

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) :-

112 (165) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಯಾವ ಯಾವ ರೀತಿಯ ಗಣಿಗಾರಿಕೆಯ ಗುತ್ತಿಗೆಗಳನ್ನು ಎಲ್ಲೆಲ್ಲಿ ಯಾರ್ಯಾರಿಗೆ ನೀಡಲಾಗುತ್ತಿದೆ ; (ವಿವರ ನೀಡುವುದು)

(ಆ) ಇದಕ್ಕೆ ಅನುಸರಿಸಿರುವ ಮಾನದಂಡಗಳೇನು ;

(ಇ) ಗಣಿ ಗುತ್ತಿಗೆ ಹರಾಜಿನಿಂದ ರಾಜ್ಯ ಸರ್ಕಾರಕ್ಕೆ ಬರುವ ಆದಾಯ ಎಷ್ಟು ;

(ಈ) ಸದರಿ ಗಣಿ ಗುತ್ತಿಗೆಯಿಂದ ತೆಗೆಯಲಾದ ಗಣಿ ಸಾಮಗ್ರಿ ಎಷ್ಟು; ಇದನ್ನು ಎಲ್ಲೆಲ್ಲಿಗೆ ಯಾವ ಉದ್ದೇಶಕ್ಕೆ ಬಳಸಲಾಗಿದೆ ; ರಫ್ತು ಮಾಡಲಾಗಿದೆ ? (ಕಂಪನಿಗಳವಾರು, ಖನಿಜದ ಪ್ರಮಾಣವಾರು ವಿವರ ಒದಗಿಸುವುದು)